

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1597 (1738)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ನಾಗರಾಜ್ (ಸಂದೇಶ್‌ನಾಗರಾಜ್)(ಸ್ಥಳೀಯಸಂಸ್ಥೆಗಳಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

ವಿಷಯ : ಬಿಳಿಗಿರಿರಂಗನ ಬೆಟ್ಟದ ಬೈಲೂರು ಅರಣ್ಯದಲ್ಲಿ ಬಿದಿರು ಒಣಗಿರುವ ಬಗ್ಗೆ

(ಅ) ಬಿ.ಆರ್.ಟಿ. (ಬಿಳಿಗಿರಿರಂಗನ ಬೆಟ್ಟ) ಅಭಯಾರಣ್ಯದ ಬೈಲೂರು ವನ್ಯಜೀವಿ ವಿಭಾಗದಲ್ಲಿ ನೂರಾರು ಎಕರೆಯಲ್ಲಿ ಬೆಳೆದಿರುವ ಬಿದಿರು ಒಣಗಿ, ಬಿದಿರಕ್ಕಿ ಬಿಟ್ಟು, ಅವಸಾನವಾಗುತ್ತಿರುವುದು ಇಲಾಖೆಯ ಗಮನಕ್ಕೆ ಬಂದಿದೆಯೇ; ಒಣಗಿಹೋಗುವ ಈ ಬಿದಿರಿಗೆ ಪರ್ಯಾಯವಾಗಿ ಹೊಸದಾಗಿ ಬಿದಿರನ್ನು ಬಿತ್ತನೆ ಮಾಡಿ ಬೆಳೆಸಲು ಕ್ರಮ ತೆಗೆದುಕೊಳ್ಳಲಾಗಿದೆಯೇ;

(ಆ) ಆನೆಗಳ ಪ್ರಮುಖ ಆಹಾರವಾಗಿರುವ ಈ ಬಿದಿರನ್ನು ಹೆಚ್ಚು ಪ್ರದೇಶದಲ್ಲಿ ಬೆಳೆಸಲು ಕ್ರಮ ಜರುಗಿಸಲಾಗುವುದೇ ;

(ಇ) ಒಣಗಿ ನಿಂತಿರುವ ಬಿದಿರಿಗೆ ಮುಂದಿನ ಬೇಸಿಗೆ ದಿನಗಳಲ್ಲಿ ಬೆಂಕಿ ಬಿದ್ದು ಅರಣ್ಯಕ್ಕೆ ಅಪಾಯ ಸಂಭವಿಸಬಹುದಾದ ಸ್ಥಿತಿ ಇರುವುದರಿಂದ ಬೆಂಕಿ ಬೀಳದಂತೆ ಮುನ್ನೆಚ್ಚರಿಕೆ ಕ್ರಮ ತೆಗೆದುಕೊಳ್ಳಲಾಗುವುದೇ ?